

# ಕರ್ನಾಟಕ ವಿಧಾನ ಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

## ಚುಕ್ಕೆ ರಹಿತ ಪ್ರಶ್ನೆ

ದಿನಾಂಕ : 17-03-2021 ಪ್ರಶ್ನೆ ಸಂಖ್ಯೆ : 1185 (1455)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಗೋವಿಂದ ರಾಜು (ವಿಧಾನಸಭೆಯಿಂದ ಚುನಾಯಿತರಾದವರು)

ಉತ್ತರ ನೀಡಬೇಕಾದ ದಿನಾಂಕ : 17-03-2021

ಉತ್ತರಿಸುವ ಸಚಿವರು : ಪಶುಸಂಗೋಪನೆ ಸಚಿವರು

ವಿಷಯ : ಕೋಳಿ ಸಾಕಾಣಿಕೆಯನ್ನು ಕೃಷಿ ಎಂದು ಪರಿಗಣಿಸುವ ಬಗ್ಗೆ

(ಅ) ಕೋಳಿ ಸಾಕಾಣಿಕೆಯನ್ನು ಕೃಷಿ ಎಂದು ಪರಿಗಣಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ ;

(ಆ) ಹಾಗಿದ್ದಲ್ಲಿ, ಕೋಳಿ ಸಾಕಾಣಿಕೆಯನ್ನು ರಾಜ್ಯಾದಾದ್ಯಂತ ರೈತರು ಉಪ ಕಸುಬನ್ನಾಗಿ ಹಾಗೂ ಕೆಲವು ರೈತರು ದೊಡ್ಡ ಪ್ರಮಾಣದಲ್ಲಿ ಕೋಳಿ ಸಾಕಾಣಿಕೆ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಇ) ಕೋಲಾರ ಜಿಲ್ಲೆಯಂತಹ ಕೃಷಿ ಆಧಾರಿತ ಜಿಲ್ಲೆಗಳಲ್ಲಿ ಕೋಳಿ ಸಾಕಾಣಿಕೆಯನ್ನು ಉತ್ತೇಜಿಸಲು ಸರ್ಕಾರ ಯಾವುದಾದರೂ ಯೋಜನೆಗಳನ್ನು ರೂಪಿಸಿದೆಯೇ ; ಹಾಗಿದ್ದಲ್ಲಿ, ಯೋಜನೆಗಳ ಸಂಪೂರ್ಣ ಮಾಹಿತಿ ನೀಡುವುದು ;

(ಈ) ರೈತರು ಕೋಳಿ ಸಾಕಾಣಿಕೆಯನ್ನು ಮಾಡಲು ವಿಶೇಷ ಬಡ್ಡಿ ದರದಲ್ಲಿ ಸರ್ಕಾರಿ ಬ್ಯಾಂಕುಗಳಿಂದ ಸಾಲ ಸೌಲಭ್ಯ ಪಡೆಯಲು ಸರ್ಕಾರ ಕ್ರಮ ಕೈಗೊಳ್ಳುವುದೇ ;

(ಉ) ಹಾಗಿದ್ದಲ್ಲಿ, ಕೋಳಿ ಸಾಕಾಣಿಕೆ ಮನೆಗಳನ್ನು (Shed) ನಿರ್ಮಿಸುವಾಗ ಭೂ-ಪರಿವರ್ತನೆ ಮಾಡಿಸಬೇಕೆಂದು ವಾಯು ಮಾಲಿನ್ಯ ನಿಯಂತ್ರಣ ಮಂಡಳಿಯಿಂದ ನಿರಾಪೇಕ್ಷಣಾ ಪತ್ರವನ್ನು ಕಡ್ಡಾಯಗೊಳಿಸಲಾಗಿದೆಯೇ ;

(ಊ) ಹಾಗಿದ್ದಲ್ಲಿ, ಇದರಿಂದ ಕೋಳಿ ಸಾಕಾಣಿಕೆದಾರರಿಗೆ ತೊಂದರೆಯಾಗುತ್ತಿರುವುದು ನಿಜವಲ್ಲವೇ ;

(ಋ) ನೆರೆ ರಾಜ್ಯ ತೆಲಂಗಾಣದಲ್ಲಿ ಕೋಳಿ ಸಾಕಾಣಿಕೆಗೆ ವಿದ್ಯುತ್ ರಿಯಾಯಿತಿಯಂತಹ ಹಾಗೂ ಇತರೆ ಸವಲತ್ತುಗಳನ್ನು ನೀಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; ಹಾಗಿದ್ದಲ್ಲಿ, ಸರ್ಕಾರವು ಅಂತಹ ಸೌಲಭ್ಯಗಳನ್ನು ಒದಗಿಸಲು ಕ್ರಮ ಕೈಗೊಳ್ಳುವುದೇ ;

(ಎ) ರಾಜ್ಯದಲ್ಲಿ ಹಕ್ಕಿಜ್ವರದಂತಹ ಮಾರಕ ಖಾಯಿಲೆಗಳು ಬಂದಾಗ ಪಶುಸಂಗೋಪನೆ ಇಲಾಖೆಯಲ್ಲಿ ರಕ್ತ ಪರೀಕ್ಷಾ ಕೇಂದ್ರ ಇಲ್ಲದಿರುವುದು ಹಾಗೂ ನುರಿತ ತಜ್ಞರು ಇಲಾಖೆಯಲ್ಲಿ ಇಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಏ) ಹಾಗಿದ್ದಲ್ಲಿ, ಮುಂದಿನ ದಿನಗಳಲ್ಲಿ ಸರ್ಕಾರ ಈ ಎಲ್ಲಾ ಸೌಲಭ್ಯಗಳನ್ನು ಒದಗಿಸಲು ಕ್ರಮ ಕೈಗೊಳ್ಳುವುದೇ ? (ವಿವರಗಳನ್ನು ನೀಡುವುದು)